# ಕರ್ನಾಟಕ ವಿಧಾನ ಪರಿಷತ್

| | | | |
|---|---|---|---|
| 01. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 406 |
| 02. | ಮಾನ್ಯ ವಿಧಾನ ಪರಿಷತ್ ಸದಸ್ಯರ ಹೆಸರು | : | ಶ್ರೀ. ಎಂ.ಪಿ.ಸುನಿಲ್ ಸುಬ್ರಮಣಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 03. | ಉತ್ತರಿಸುವ ದಿನಾಂಕ | : | 04-02-2021 |
| 04. | ಉತ್ತರಿಸುವ ಸಚಿವರು. | : | ಮಾನ್ಯ ಗೃಹ ಸಚಿವರು. |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ ಮೂರು ವರ್ಷಗಳಲ್ಲಿ ಖುಲಾಸೆ ಸಮಿತಿಯು ತನಿಖಾಧಿಕಾರಿಗಳ ನ್ಯೂನತೆ ಮತ್ತು ಅಭಿಯೋಜಕರ ನಿರ್ಲಕ್ಷ್ಯತೆಯಿಂದ ಖುಲಾಸೆಗೊಂಡ ಪ್ರಕರಣಗಳ ಬಗ್ಗೆ ವರದಿ ನೀಡಿದೆಯೇ; | ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 126 ಸಿಡಬ್ಲ್ಯೂಪಿ 2014, ದಿನಾಂಕ:20.10.2014 ರನ್ವಯ ಕೆಳಕಂಡಂತೆ ಖುಲಾಸೆ ಪ್ರಕರಣಗಳ ಪರಾಮರ್ಶೆ ಸಮಿತಿಗಳನ್ನು ರಚಿಸಲಾಗಿದೆ.<br>1) ರಾಜ್ಯ ಮಟ್ಟದ ಖುಲಾಸೆ ಪ್ರಕರಣಗಳ ಪರಾಮರ್ಶೆ ಸಮಿತಿ.<br>2) ವಲಯ/ನಗರ ಮಟ್ಟದ ಖುಲಾಸೆ ಪ್ರಕರಣಗಳ ಪರಾಮರ್ಶೆ ಸಮಿತಿ.<br>3) ಜಿಲ್ಲಾ ಮಟ್ಟದ ಖುಲಾಸೆ ಪ್ರಕರಣಗಳ ಪರಾಮರ್ಶೆ ಸಮಿತಿ.<br>ವಲಯ/ನಗರ/ಜಿಲ್ಲಾ ಮಟ್ಟದ ಖುಲಾಸೆ ಪ್ರಕರಣಗಳ ಪರಾಮರ್ಶೆ ಸಮಿತಿಗಳು ನಿಗಧಿತವಾಗಿ ಖುಲಾಸೆ ಪ್ರಕರಣಗಳನ್ನು ಪರಾಮರ್ಶಿಸಲು ಕೈಗೊಳ್ಳುವ ಸಭೆಗಳ ವರದಿಗಳನ್ನು ತ್ರೈಮಾಸಿಕವಾಗಿ ಕೈಗೊಳ್ಳಲಾಗುವ ರಾಜ್ಯ ಮಟ್ಟದ ಖುಲಾಸೆ ಪ್ರಕರಣಗಳ ಪರಾಮರ್ಶೆ ಸಮಿತಿಯಲ್ಲಿ ಪರಿಶೀಲಿಸಿ, ಅಗತ್ಯ ನಿರ್ದೇಶನ ಹಾಗೂ ಹಿಂಬಾಲಿಕಾ ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ | ಖುಲಾಸೆಗೊಂಡ ನಂತರ ಎಷ್ಟು ತಿಂಗಳಲ್ಲಿ ವರದಿ ನೀಡಬೇಕು; (ಕಾಲ ಮಿತಿಯ ವಿವರ ನೀಡುವುದು) ಖುಲಾಸೆ ಸಮಿತಿ ವರದಿ ನೀಡಿದ ನಂತರ ಎಷ್ಟು ಅವಧಿಯಲ್ಲಿ ಶಿಸ್ತು ಕ್ರಮಕ್ಕೆ ಆದೇಶಿಸಲಾಗುತ್ತದೆ; (ಕಾಲಮಿತಿಯ ವಿವರ ನೀಡುವುದು) | ರಾಜ್ಯ/ವಲಯ/ನಗರ ಮಟ್ಟದ ಖುಲಾಸೆ ಪ್ರಕರಣಗಳ ಪರಾಮರ್ಶೆ ಸಮಿತಿಗಳ ಸಭೆಯನ್ನು ತ್ರೈಮಾಸಿಕವಾಗಿ ಹಾಗೂ ಜಿಲ್ಲಾ ಮಟ್ಟದ ಖುಲಾಸೆ ಪ್ರಕರಣಗಳ ಪರಾಮರ್ಶೆ ಸಮಿತಿಗಳ ಸಭೆಯನ್ನು ಮಾಸಿಕವಾಗಿ ಕೈಗೊಳ್ಳಲಾಗುತ್ತಿದ್ದು, ಸದರಿ ಅವಧಿಯಲ್ಲಿ ಘಟಕಗಳ ವ್ಯಾಪ್ತಿಗೊಳಪಡುವ ಪ್ರಕರಣಗಳಿಗೆ ಸಂಬಂಧಿಸಿದಂತೆ ವಿವಿಧ ನ್ಯಾಯಗಳು ಹೊರಡಿಸಿರುವ ಖುಲಾಸೆ ಆದೇಶಗಳನ್ನು ಪರಿಶೀಲಿಸಲಾಗುತ್ತಿದೆ. |
| ಇ | ಕಳೆದ ಮೂರು ವರ್ಷಗಳಲ್ಲಿ ಈ ಖುಲಾಸೆ ಸಮಿತಿಯ ವರದಿಯನ್ವಯ ತೆಗೆದುಕೊಂಡ ಶಿಸ್ತು ಕ್ರಮಗಳೇನು?<br>(ವಿವರಗಳನ್ನು ನೀಡುವುದು). | ಖುಲಾಸೆಗೊಂಡ ಪ್ರಕರಣಗಳನ್ನು ಪರಿಶೀಲಿಸಿ, ತನಿಖಾಧಿಕಾರಿ ಲೋಪಗಳಿಗೆ ಸಂಬಂಧಿಸಿದಂತೆ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಡವಳಿ) 1965 ಮತ್ತು ಅದರ ತಿದ್ದುಪಡಿ 1989 ರನ್ವಯ ಕ್ರಮ ಕೈಗೊಳ್ಳಲಾಗುತ್ತಿದೆ ಹಾಗೂ ಅಭಿಯೋಜಕರ ಲೋಪಗಳಿಗೆ ಸಂಬಂಧಿಸಿದಂತೆ ಸೂಕ್ತ ಕ್ರಮವನ್ನು ನಿರ್ದೇಶಕರು, ಅಭಿಯೋಜನೆ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರ ಹಂತದಲ್ಲಿ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ ಹೆಚ್‌ಡಿ 02ಪಿಸಿಕ್ಯೂ 2021

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು